ಒಂದಾಣೆ ಮಾಲೆ 211

# ಅಕಬರ್ ಬೀರಬಲ್ ಪ್ರಶ್ನೋತ್ತರೀ

['ಒಂದಾಣೆಮಾಲೆ'ಯ 135ನೇ ಪ್ರಕಟಣೆ "ಅಕಬರ ಬೀರಬಲ ವಿನೋದ" ಹಾಗೂ 190ನೇ ಪ್ರಕಟಣೆ "ಬೀರಬಲನ ವಿನೋದ" ಇವೆರಡೂ ಪುಸ್ತಕಗಳಲ್ಲಿ ಬಂದ ಮೂವತ್ತು ಘಟನೆಗಳನ್ನು ಬಿಟ್ಟು, ಉಳಿ. ಕೆಲವನ್ನು ಇಲ್ಲಿ ಕಾಣಿಸಲಾಗಿದೆ.]



ಸಂಗ್ರಾಹಕಃ
ಶ್ರೀ ಬಳ್ಕೂರು ಸುಬ್ರಾಯ ಅಡಿಗ, ಗಂಗೊಳ್ಳಿ.



1958

ಬೆಲೆ: ಆಣೆ ಒಂದು.

ಒಂದಾಣೆ ಮಾಲೆ, ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1958ನೇ ನವಂಬರ ತಿಂಗಳ ಮೂರನೆಯ ವಾರದ ವರೆಗೆ 211 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

211 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4202 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಅಕಬರ್ ಬೀರಬಲ್ ಪ್ರಶ್ನೋತ್ತರೀ

['ಒಂದಾಣೆಮಾಲೆ'ಯ 135ನೇ ಪ್ರಕಟಣೆ "ಅಕಬರ ಬೀರಬಲ ವಿನೋದ" ಹಾಗೂ 190ನೇ ಪ್ರಕಟಣೆ "ಬೀರಬಲನ ವಿನೋದ" ಇವೆರಡೂ ಪುಸ್ತಕಗಳಲ್ಲಿ ಬಂದ ಮೂವತ್ತು ಘಟನೆಗಳನ್ನು ಬಿಟ್ಟು, ಉಳಿದ ಕೆಲವನ್ನು ಇಲ್ಲಿ ಕಾಣಿಸಲಾಗಿದೆ.]

## ೧. ಸೂರ್ಯ ಪೂರ್ವದಲ್ಲೇ ಏಕೆ ಉದಿಸುತ್ತಾನೆ?

ಒಂದು ದಿನ ಬೀರಬಲನು ಅಕಬರ ಬಾದಶಹನೊಡನೆ—"ಮಹಾ ಪ್ರಭು, ನನ್ನದೊಂದು ಸಂದೇಹವನ್ನು ನಿವಾರಿಸುತ್ತೀರಾ?" ಎಂದು ಪ್ರಶ್ನಿಸಿದನು. "ಹೂಂ; ಹೇಳು"—ಎಂದ ಬಾದಶಹ.

"ಸೂರ್ಯನು ದಿನಾಲೂ ಪೂರ್ವದಲ್ಲೇ ಏಕೆ ಉದಯಿಸುತ್ತಾನೆ? ಪಶ್ಚಿಮ ಯಾ ಇನ್ನಾವ ದಿಕ್ಕಿನಲ್ಲೂ ಅದೇಕೆ ಉದಯಿಸುವುದಿಲ್ಲ?"—ಬೀರಬಲನು ಪ್ರಶ್ನಿಸಿದನು.

"ಇಂಥ ಪ್ರಶ್ನೆಯನ್ನು ಮೂರ್ಖನೊಡನೆ ಕೇಳು" ಎಂದನು ಅಕಬರ.

"ಅದಕ್ಕೆಂದೇ ನಿಮ್ಮೊಡನೆ ಕೇಳುತ್ತಿದ್ದೇನೆ, ಮಹಾರಾಜ!"—ಬೀರಬಲನು ತಕ್ಷಣ ಉತ್ತರಿಸಿದನು.

ಬಾದಶಹನು ತನ್ನ ಮಾತಿನಿಂದಲೇ ಸೋತುಹೋಗಿ, ಲಜ್ಜಿತನಾದನು.

## ೨. ಸತ್ಯಾಸತ್ಯಗಳೊಳಗೆ ಅಂತರ?

ಒಂದು ದಿನ ಅಕಬರನು ಬೀರಬಲನೊಡನೆ,—"ಸತ್ಯಾಸತ್ಯಗಳೊಳಗೆ ಅಂತರವೆಷ್ಟು?" ಎಂದು ಕೇಳಿದನು. "ಕಣ್ಣಿಗೂ ಕಿವಿಗೂ ಇರುವಷ್ಟೇ" ಎಂದನು ಬೀರಬಲ. ಈ ಉತ್ತರವು ಬಾದಶಹನಿಗೆ ಅರ್ಥವಾಗಲಿಲ್ಲ. ಆಗ ಬೀರಬಲನು ಅದನ್ನು ವಿವರಿಸುತ್ತಾ ಹೇಳಿದನು: "ಕಣ್ಣಿನಿಂದ ಕಂಡ ಘಟನೆ ಸತ್ಯ ಹಾಗೂ ಕಿವಿಯಿಂದ ಕೇಳಿದ ಘಟನೆ ಸುಳ್ಳು. ಇದೇ ಆ ವ್ಯತ್ಯಾಸ.''

## ೩. ಅಂಗೈಯಲ್ಲಿ ರೋಮವೇಕೆ ಬೆಳೆಯುವುದಿಲ್ಲ?

ಒಮ್ಮೆ ಅಕಬರನು ಬೀರಬಲನೊಡನೆ, "ನನ್ನ ಅಂಗೈಯಲ್ಲಿ ರೋಮ ಏಕಿಲ್ಲ!'' ಎಂದು ಕೇಳಿದನು. "ನೀವು ಬಡವರಿಗೂ ವಿದ್ವಾಂಸರಿಗೂ ದಿನಾಲೂ ಈ ಕೈಗಳಿಂದಲೇ ದಾನಮಾಡುತಿದ್ದೀರಿ. ಆ ಘರ್ಷಣೆಯಿಂದ ರೋಮ ಬೆಳೆಯಲು ಎಡೆ ಸಿಗುವುದಿಲ್ಲ''—ಬೀರಬಲನೆಂದನು.

ತನ್ನ ಪ್ರಶಂಸೆ ಕೇಳಿ ಬಾದಶಹನಿಗೆ ಅಪಾರಹರ್ಷವಾಯಿತು. ಆದರೂ ಇನ್ನಿಷ್ಟು ತಮಾಷೆ ಮಾಡಬೇಕೆಂದು,"ನಿನ್ನ ಅಂಗೈಯಲ್ಲೇಕೆ ಬೆಳೆಯಲಿಲ್ಲ?'' —ಎಂದು ಪ್ರಶ್ನಿಸಿದನು. "ದಾನ ತೆಗೆದುಕೊಂಡು ತೆಗೆದುಕೊಂಡು ನನ್ನ ಅಂಗೈ ಸವೆದುಹೋಗಿದೆ; ಆ ಘರ್ಷಣೆಯಿಂದ ರೋಮ ಬೆಳೆಯಲಿಲ್ಲ!''— ಎಂದು ಉತ್ತರವಿತ್ತನು ಬೀರಬಲ.

"ಹಾಗಿದ್ದರೆ ಉಳಿದ ದರಬಾರಿಗಳ ಅಂಗೈಗಳಲ್ಲಿ ಅದೇಕೆ ರೋಮ ವಿಲ್ಲ!'' "ಇದರ ಉತ್ತರ ಸ್ಪಷ್ಟವಿದೆ. ನೀವು ನನಗಾಗಲೀ ಇತರ ವಿದ್ವಾಂಸರಿಗಾಗಲೀ ದಾನ ಕೊಡುತ್ತಿರುವಾಗ ಈ ದರಬಾರಿಗಳು ಮತ್ಸರ ದಿಂದ ಕೈಹಿಸುಕಿಕೊಳ್ಳುತ್ತಾ ಕುಳಿತಿರುತ್ತಾರೆ. ತತ್ಪರಿಣಾಮವಾಗಿ ಅವರ ಅಂಗೈಗಳಲ್ಲೂ ರೋಮ ಬೆಳೆಯಲು ತಡೆಯುಂಟಾಯಿತು.''

ಬಾದಶಹನು ಈ ಉತ್ತರದಿಂದ ಹಿರಿಹಿರಿ ಹಿಗ್ಗಿದನು.

## ೪. ಕತ್ತಲು

ಒಮ್ಮೆ ಏಕಾಂತದಲ್ಲಿ ಕುಳಿತಾಗ ಬಾದಶಹನ ಮನಸ್ಸಿನಲ್ಲಿ ಒಂದು ಸಂಶಯವುಂಟಾಯಿತು........''ಪ್ರಪಂಚದಲ್ಲಿ ಸೂರ್ಯ ಚಂದ್ರರ ದೃಷ್ಟಿಗೆ ಬೀಳದೆ ತಪ್ಪಿಸಿಕೊಳ್ಳುವ ವಸ್ತುವಾವುದಾದರೂ ಇದೆಯೆ?'' ಎಂದವನು ಯೋಚಿಸತೊಡಗಿದನು. ಯಾವುದೂ ಅವನ ಮನಸ್ಸಿಗೆ ಹೊಳೆಯಲಿಲ್ಲ.

ಅದೇ ದಿನ ಅವನು, ತುಂಬಿದ ಸಭೆಯಲ್ಲಿ ಈ ಪ್ರಶ್ನೆ ಕೇಳಿದನು. ಆದರೆ ಯಾರಿಗೂ ಉತ್ತರ ಹೊಳೆಯಲಿಲ್ಲ. ಕಟ್ಟಕಡೆಗೆ ಬೀರಬಲ್ ಹೇಳಿದನು: ''ಮಹಾರಾಜ! ಪ್ರಪಂಚದಲ್ಲಿ ಸೂರ್ಯ ಚಂದ್ರರ ದೃಷ್ಟಿಗೆ ಬೀಳದ ವಸ್ತುವೆಂದರೆ ಕತ್ತಲು ಮಾತ್ರ ಎಂದು ನನಗನ್ನಿಸುತ್ತದೆ!'' ಈ ಉತ್ತರ ದಿಂದ ಎಲ್ಲರೂ ಸಂತೋಷ ತಾಳಿದರು.

## ೫. ನೀವು ಗೊರಟುಗಳನ್ನೂ ನುಂಗಿಬಿಟ್ಟಿರಿ!

ಒಂದು ದಿನ ಅಕಬರ ಬಾದಶಹನು ತನ್ನ ಹಿರಿ ಬೇಗಮಳೊಟ್ಟಿಗೆ ಕುಳಿತು ಮಾವಿನ ಹಣ್ಣು ತಿನ್ನುತ್ತಾ ಇದ್ದನು. ಬೀರಬಲನೂ ಆಗ ಅಲ್ಲಿದ್ದನು. ಬಾದಶಹನು ಮಾವಿನ ಹಣ್ಣುಗಳನ್ನು ತಿಂದು ಸಿಪ್ಪೆ ಹಾಗೂ ಗೊರಟುಗಳನ್ನು ಬೇಗಮಳ ರಾಶಿಯಲ್ಲಿ ಹಾಕಿಬಿಡುತ್ತಿದ್ದನು. ತನ್ನ ಜಾಣ್ಮೆ ಅರಿವಾಗದಿರಲೆಂದು ನಾಲ್ಕೈದು ಗೊರಟುಗಳನ್ನು ಮಾತ್ರ ತನ್ನ ರಾಶಿಯಲ್ಲಿಟ್ಟುಕೊಂಡಿದ್ದನು. ಬೇಗಮಳಿಗೆ ಬಾದಶಹನ ಚಾತುರ್ಯ ಅರಿವಾದರೂ, ಮಾತಾಡದೆ ಹಣ್ಣು ತಿನ್ನುತ್ತಾ ಕುಳಿತಳು. ಸ್ವಲ್ಪ ಹೊತ್ತಿನ ಬಳಿಕ ಬಾದಶಹನು ಬೀರಬಲನನ್ನು ಕುರಿತು........"ನೋಡು, ನಾನು ೫—೬ ಹಣ್ಣುಗಳನ್ನು ಮಾತ್ರ ತಿಂದೆ. ಆದರೆ ಬೇಗಂ ಮಾತ್ರ ೨೦ — ೨೫ ಹಣ್ಣು ತಿಂದು ಗೊರಟು ಸಿಪ್ಪೆಗಳನ್ನು ರಾಶಿಹಾಕಿದ್ದಾಳೆ!" ಎಂದನು. ಬೇಗಮಳು ನಾಚಿಕೆಯಿಂದ ತಲೆತಗ್ಗಿಸಿದಳು.

ಬೀರಬಲನು ಇಂತಹ ಸ್ವರ್ಣಸಂಧಿಯನ್ನು ಎಂದೂ ಕಳೆದುಕೊಳ್ಳುತ್ತಿದ್ದಿಲ್ಲ. "ಮಾವಿನ ಗೊರಟೆಗಳನ್ನು ಕಂಡಾಕ್ಷಣ ಬೇಗಂ ಹೊಟ್ಟೆಬಾಕಳೆಂದು ನೀವೆಂತು ರುಜುವಾತು ಪಡಿಸಬಲ್ಲಿರಿ? ಅವರು ಗೊರಟೆಗಳನ್ನಾದರೂ ಬಿಟ್ಟಿದ್ದಾರೆ. ನೀವು ಅವನ್ನೂ ನುಂಗಿಬಿಟ್ಟಿದ್ದೀರಿ; ಈಗ ದೊಡ್ಡ ಹೊಟ್ಟೆಬಾಕರು ಯಾರೆಂದು ನೀವೇ ಹೇಳಿರಿ!" ಎಂದುಬಿಟ್ಟನು.

ಬಾದಶಹನು ಇದನ್ನು ಕೇಳಿ ನಾಚಿಕೆಯಿಂದ ತಲೆತಗ್ಗಿಸಿದನು. ಬೇಗಂ ತುಂಬ ಹರ್ಷಗೊಂಡಳು.

## ೬. ಮೂರ್ಖರ ನಾಮಾವಳಿ

ಬಾದಶಹ ಅಕಬರನ ದರಬಾರಿಗೆ ಒಮ್ಮೆ ಅರಬಿದೇಶದ ಕುದುರೆ ವ್ಯಾಪಾರಿಯೊಬ್ಬನು ಕೆಲವು ಕುದುರೆಗಳೊಡನೆ ಬಂದನು. ಬಾದಶಹನಿಗೆ ಅರಬೀಕುದುರೆಗಳು ತುಂಬ ಮೆಚ್ಚಿಕೆಯಾದವು. ಅವನ ಬಳಿಯಿದ್ದ ಕುದುರೆಗಳನ್ನೆಲ್ಲ ಕೊಂಡುಕೊಂಡನು; ಮತ್ತೆ ಇನ್ನೂ ಕೆಲವು ಕುದುರೆಗಳನ್ನು ಕಳಿಸಿಕೊಡೆಂದು ಹೇಳಿ, ಆ ವ್ಯಾಪಾರಿಗೆ ಒಂದು ಸಾವಿರ

ರೂಪಾಯಿಗಳನ್ನು ಮುಂಗಡ ಕೊಟ್ಟನು. ವ್ಯಾಪಾರಿಯು ತನ್ನೂರಿಗೆ ಹೊರಟುಹೋದನು.

ಕೆಲವು ದಿನಗಳ ಬಳಿಕ ಅಕಬರನು ಬೀರಬಲನೊಡನೆ,—“ಈ ಪ್ರಪಂಚದಲ್ಲಿ ಮೂರ್ಖರೇನೋ ಬಹಳ ಮಂದಿಯಿದ್ದಾರೆ. ಆದರೆ, ಶತಮೂರ್ಖರು ಹೆಚ್ಚಿರಲಾರರು; ನಮ್ಮ ಪಟ್ಟಣದಲ್ಲಿ ಶತಮೂರ್ಖರಾರಾದರೂ ಇದ್ದರೆ, ಅಂತಹರ ಪಟ್ಟಿಯೊಂದನ್ನು ತಯಾರಿಸಿ ಕೊಡು” ಎಂದನು. “ಅಪ್ಪಣೆ”—ಎಂದು ಹೇಳಿ, ಬೀರಬಲನು ಕಾರ್ಯಪ್ರವೃತ್ತನಾದನು.

ಮರುದಿನವೇ ಶತಮೂರ್ಖ ನಾಮಾವಳಿ ಸಿದ್ಧವಾಯಿತು. ಬಾದಶಹನು ಅದನ್ನು ಹಿಡಿದು ನೋಡಿದಾಗ ಮೊತ್ತಮೊದಲು ತನ್ನ ಹೆಸರೇ ಕಣ್ಣಿಗೆ ಬಿತ್ತು. ಇದನ್ನು ಕಂಡು ಅಕಬರನಿಗೆ ಆಶ್ಚರ್ಯವೂ ಕೋಪವೂ ಉಂಟಾಯಿತು. “ಇದಕ್ಕೇನು ಕಾರಣ?” ಎಂದು ಬೀರಬಲನನ್ನು ಪ್ರಶ್ನಿಸಿದನು. ಅವನು ನಮ್ರತೆಯಿಂದ ಹೀಗೆಂದನು: “ಮಹಾಸ್ವಾಮಿ, ಅರಬೀ ವ್ಯಾಪಾರಿಗೆ ಅವನ ಹೆಸರು ವಿಳಾಸ ಯಾವುದನ್ನೂ ತಿಳಿದುಕೊಳ್ಳದೆ ಒಂದು ಸಾವಿರ ರೂಪಾಯಿ ಮುಂಗಡ ಕೊಟ್ಟುಬಿಟ್ಟಿರಿ; ನೀವೇ ಸ್ವಲ್ಪ ವಿಚಾರಮಾಡಿರಿ—ಅವನು ಕುದುರೆಗಳನ್ನು ತಾರದೆ ಹೋದರೆ ನೀವೇನು ಮಾಡಬಲ್ಲಿರಿ? ಹೆಸರು ವಿಳಾಸ ಯಾವುದೂ ಗೊತ್ತಿಲ್ಲ! ಇದು ಮೂರ್ಖತನವಲ್ಲವೆ? ಇದಕ್ಕಿಂತಲೂ ಹೆಚ್ಚಿನ ಮೂರ್ಖತನ ಬೇರಾವುದು?” ಬಾದಶಹನು ಮನಸ್ಸಿನಲ್ಲೇ ತನ್ನ ತಿಳಿಗೇಡಿತನಕ್ಕಾಗಿ ಪಶ್ಚಾತ್ತಾಪಪಟ್ಟನು. ಆದರೆ, ಬಹಿರಂಗವಾಗಿ, ಸೋಲೊಪ್ಪಿಕೊಳ್ಳದೆ,........“ಒಂದು ವೇಳೆ ಆ ವ್ಯಾಪಾರಿ ಕುದುರೆಗಳನ್ನು ತಂದುಕೊಟ್ಟರೆ?” ಎಂದು ಪ್ರಶ್ನಿಸಿದನು.

ಬೀರಬಲನು ತಕ್ಷಣ ಉತ್ತರವಿತ್ತನು: “ಆಗ ನಿಮ್ಮ ಹೆಸರನ್ನು ಹೊಡೆದು ಅಲ್ಲಿ ಆ ವ್ಯಾಪಾರಿಯ ಹೆಸರು ಬರೆಯುತ್ತೇನೆ”—ಎಂದನು.

ಬಾದಶಹನು ಈ ಉತ್ತರದಿಂದ ಇನ್ನೂ ಲಜ್ಜಿತನಾದನು.

## ೨. ದೇವರಿಂದಲೂ ಆಗದಿರುವ ಕೆಲಸ ನನ್ನಿಂದ ಸಾಧ್ಯವೆ?

ಒಂದು ದಿನ ಅಕಬರನು ನಿಶ್ಚಿತ ಸಮಯಕ್ಕಿಂತ ಮೊದಲೇ ಸಭಾಭವನಕ್ಕೆ ಬಂದನು. ಸಭಾಸದರೆಲ್ಲ ಕ್ರಮವಾಗಿ ಬರತೊಡಗಿದರು. “ದೇವರಿಂದಲೂ ಆಗದ ಕೆಲಸವನ್ನು ನಾನು ಮಾಡಬಲ್ಲೆನೆ?” ಎಂದು ಎಲ್ಲರೊಡ

ನೆಯೂ ಬಾದಶಹನು ಪ್ರಶ್ನಿಸತೊಡಗಿದನು. "ನೀವು ಮಾಡಬಲ್ಲಿರಿ" ಎಂದರೆ "ಯಾವುದು?" ಎಂಬ ಪ್ರಶ್ನೆ ಬರುತ್ತದೆ. ಸುಮ್ಮನೆ ಇರುವುದೂ ಸಾಧ್ಯವಿಲ್ಲ. "ನೀವು ಮಾಡಲಾರಿರಿ" ಎಂದರೆ ಬಾದಶಹನು ಸಿಟ್ಟಾಗಿ ದಂಡಿಸಬಹುದು. ಹೀಗೆ ದರಬಾರಿಗಳೆಲ್ಲ ಗೊಂದಲಕ್ಕೀಡಾದರು.

ಕಟ್ಟಕಡೆಗೆ ಬೀರಬಲನು ಬಂದಾಗ ಬಾದಶಹನು ಅವನಿಗೂ ಅದೇ ಪ್ರಶ್ನೆ ಕೇಳಿದನು. ಕೂಡಲೇ ಅವನಂದನು: "ಮಹಾರಾಜ! ದೇವರಿಂದಾಗದ ಕೆಲಸ ನಿಮ್ಮಿಂದ ಸಾಧ್ಯ!"

"ಅದೆಂತು?"—ಅಕಬರನು ಪ್ರಶ್ನಿಸಿದನು

"ಈ ಪ್ರಪಂಚವನ್ನು ದೇವರೇ ಸೃಷ್ಟಿಸಿದ್ದಾನೆ. ಅವನೇ ನಮ್ಮೆಲ್ಲರನ್ನೂ ಸೃಷ್ಟಿಸಿದವನು; ಆ ಸೃಷ್ಟಿಕರ್ತನು ಯಾರ ಮೇಲಾದರೂ ಸಿಟ್ಟಾದರೆ ಅವನನ್ನು ತನ್ನ ದೇಶದಿಂದ ಹೊರದೂಡಲಾರ; ದೇಶನಿರ್ವಾಸನದ ಅಜ್ಞೆಯಿತ್ತರೂ ಅದನ್ನು ನೆರವೇರಿಸುವುದು ಸಾಧ್ಯವಿಲ್ಲ. ಏಕೆಂದರೆ, ಈ ಇಡೀ ವಿಶ್ವವೇ ಅವನದು ಆ ದಂಡಾರ್ಹನು ಈ ವಿಶ್ವವನ್ನು ಬಿಟ್ಟು ಎಲ್ಲಿ ಹೋದಾನು? ಆದರೆ,ನೀವು ಮಾತ್ರ ನಿಮ್ಮ ರಾಜ್ಯದಿಂದ ಯಾರನ್ನೂ ಹೊರಗಟ್ಟಬಲ್ಲಿರಿ ತಪ್ಪಿತಸ್ಥನು ನಿಮ್ಮ ರಾಜ್ಯದ ಗಡಿಯನ್ನು ಬಿಟ್ಟು ಇತರರ ರಾಜ್ಯಕ್ಕೆ ಹೋಗಿ ವಾಸಿಸಬಹುದು" ಎಂದನು. ಬಾದಶಹನು ಬೀರಬಲನ ಉತ್ತರದಿಂದ ಪ್ರಸನ್ನನಾದನು.

## ೮. ಕತ್ತೆಗಳೇ ತಂಬಾಕು ತಿನ್ನುವುದಿಲ್ಲ

ಅಕಬರ-ಬೀರಬಲರು ಒಂದು ದಿನ ಅರಮನೆಯ ಮಾಳಿಗೆಯನ್ನೇರಿ ಪ್ರಕೃತಿಸೌಂದರ್ಯವನ್ನು ಈಕ್ಷಿಸುತಿದ್ದರು. ಅಗಲೇ ಬಾದಶಹನು ಹೊಗೆಸೊಪ್ಪಿನ ಗದ್ದೆಯ ಬಳಿಯೇ ಹುಲ್ಲು ಮೇಯುತ್ತಿರುವ ಕತ್ತೆಯೊಂದನ್ನು ಕಂಡನು. ಬೀರಬಲನು ಯಾವಾಗಲೂ ತಂಬಾಕು ತಿನ್ನುತ್ತಿದ್ದನು. ಅವನನ್ನು ಗೇಲಿಮಾಡಲು ಒಳ್ಳೇ ಸಂದರ್ಭ ದೊರೆತಂತಾಯಿತ . ಆದ್ದರಿಂದ ಅವನು ಬೀರಬಲನೊಡನೆ, "ಅಲ್ಲಿ ನೋಡು, ಕತ್ತೆಗಳೂ ತಂಬಾಕು ತಿನ್ನುವುದಿಲ್ಲ" ಎಂದನು. ಅಂದರೆ ತಂಬಾಕು ತಿನ್ನುವ ಬೀರಬಲನು ಕತ್ತೆಗಿಂತಲೂ ಹೀನ ಎಂಬ ಅರ್ಥವಾಯಿತು ಅಗಲೇ ಬೀರಬಲ್ ಮುಗುಳ್ನಗುತ್ತಾ ಹೇಳಿದನು:—"ಹೌದು ಮಹಾರಾಜ! ಕತ್ತೆಗಳೇ ತಂಬಾಕು ತಿನ್ನುವುದಿಲ್ಲ!"

ತಂಬಾಕು ತಿನ್ನದವರೇ ಕತ್ತೆಗಳು ಎಂದು ಜಾಣ್ಮೆಯಿಂದ ಹೇಳಿ ತಂಬಾಕು ಸೇವಿಸದ ಅಕಬರನನ್ನೂ ಆ ಕತ್ತೆಗಳ ಸಾಲಿಗೆ ಬೀರಬಲ್ ಸೇರಿಸಿಬಿಟ್ಟಿದ್ದ! ಬಾದಶಹನು ಅವನ ವಾಕ್ಚಾತುರ್ಯಕ್ಕೆ ತಲೆದೂಗಿದ.

## ೯. ಸಹವಾಸದೋಷ

ಅಕಬರ-ಬೀರಬಲರು ಒಮ್ಮೆ ಹರಟೆಹೊಡೆಯುತ್ತಿದ್ದಾಗ ಅಕಸ್ಮಾತ್ ಬೀರಬಲನ ಬಾಯಿಯಿಂದ ಅಪಶಬ್ದವೊಂದು ಹೊರಬಿತ್ತು. ಬಾದಶಹನಿಗೆ ತುಂಬ ಸಿಟ್ಟುಬಂತು. "ನಿನಗೆ ಮಾತಾಡುವ ಕ್ರಮವೂ ತಿಳಿದಿಲ್ಲ. ಸಭ್ಯತನದ ಅರಿವೂ ಇಲ್ಲ" ಎಂದನು. ಕೂಡಲೇ ಬೀರಬಲನೆಂದನು: "ಹೌದು ಮಹಾರಾಜ! ಮೊದಲು ನಾನು ಹೀಗಿದ್ದಿಲ್ಲ. ಆದರೆ ಈಗ ಸಹವಾಸದೋಷದಿಂದ ಹೀಗಾಗುತ್ತಿರುವುದು ಸಹಜ." ಬಾದಶಹ ನಿರುತ್ತರನಾದ.

## ೧೦. ನಾನು ನಿಮ್ಮ ಸೇವಕ!

ಒಮ್ಮೆ ಅಕಬರನು ಬದನೆಕಾಯಿ ಪಲ್ಯವನ್ನು ತುಂಬಾ ಹೊಗಳುತ್ತಿದ್ದ. ಬೀರಬಲನೂ ಅವನ ಮಾತಿಗೆ ತಲೆಯಲ್ಲಾಡಿಸಿ ಸಮ್ಮತಿಯೀಯುತ್ತಿದ್ದ. ಅಷ್ಟೇ ಅಲ್ಲ, ತಾನೂ ನಾಲ್ಕಾರು ಶಬ್ದ ಕೂಡಿಸಿ ಆ ಹೊಗಳಿಕೆಗೆ ಕಳೆಗಟ್ಟುತ್ತಿದ್ದ.

ಮತ್ತೊಂದು ದಿನ, ಬೀರಬಲನನ್ನು ಪರೀಕ್ಷಿಸಬೇಕೆಂದು ಭಾವಿಸಿ ಅಕಬರನು ಬದನೆಕಾಯಿಯನ್ನು ತುಂಬಾ ನಿಂದಿಸಿಬಿಟ್ಟ; ಅದೃಷ್ಟವಶಾತ್ ಆ ದಿನವೂ ಬೀರಬಲನು ಬದನೆಕಾಯಿಯ ಕುರಿತು ನಾಲ್ಕಾರು ದುರ್ಗುಣಗಳನ್ನು ತಿಳಿಸಿ ಬಾದಶಹನ ಮಾತನ್ನೇ ಸಮರ್ಥಿಸಿದ. ಈ ಮಾತನ್ನು ಕೇಳಿ ಅಕಬರನಿಗೆ ಬೀರಬಲನನ್ನು ತರಾಟೆಗೆ ತೆಗೆದುಕೊಳ್ಳುವ ಸಂದರ್ಭ ಸಿಕ್ಕಿತು. "ಬೀರ್‌ಬಲ್! ನಿನ್ನ ಮಾತಿನ ಮೇಲೆ ನಾನೆಂತು ವಿಶ್ವಾಸವಿಡಲಿ? ಒಮ್ಮೆ ಹೊಗಳುತ್ತೀ, ಇನ್ನೊಮ್ಮೆ ತೆಗಳುತ್ತೀ; ಹಿಂದೊಮ್ಮೆ ನಾನು ಬದನೆಯನ್ನು ಹೊಗಳಿದ್ದಾಗ ನೀನೂ ಹೊಗಳಿದ್ದೆ; ಇಂದು ತೆಗಳುತ್ತಿದ್ದಾಗ ನೀನೂ ತೆಗಳುತ್ತಿರುವಿ; ಅದೇಕೆ?" ಎಂದನು. "ಮಹಾರಾಜ! ನಾನು ಬದನೆಯ ಆಳಲ್ಲ; ನಿಮ್ಮ ಆಳು" ಎಂದು ಬೀರಬಲನು ನಮ್ರತೆಯಿಂದ ನುಡಿದನು. ಬಾದಶಹನು ಸಂತುಷ್ಟನಾದನು.

## ೧೧. ಕಳೆಯುವ ಕ್ರಮ

ಬೀರಬಲನು ಲೆಕ್ಕದಲ್ಲಿ ಬಹಳ ನಿಪುಣನಿದ್ದಾನೆಂದು ಕೇಳಿದ್ದ ಅಕಬರನು ಒಮ್ಮೆ ಅವನೊಡನೆ—"೧೨ರಲ್ಲಿ ೪ ಕಳೆದರೆ ಏನುಳಿಯುತ್ತದೆ?" ಎಂದು ಪ್ರಶ್ನಿಸಿದ. 'ಮಣ್ಣು!'—ಬೀರಬಲನು ತಕ್ಷಣ ಉತ್ತರಿಸಿದ. 'ಅದೆಂತು?'—ಬೆರಗಾಗಿ ಅಕಬರ ಪ್ರಶ್ನಿಸಿದ.

'ಮಹಾರಾಜ! ವರ್ಷಕ್ಕೆ ಹನ್ನೆರಡು ತಿಂಗಳುಗಳು: ಅವುಗಳಲ್ಲಿ ಮಳೆಗಾಲದ ನಾಲ್ಕು ತಿಂಗಳುಗಳನ್ನು ತೆಗೆದುಹಾಕಿದರೆ ಉಳಿಯುವುದು ಮಣ್ಣಲ್ಲವೆ?' ಎಂದನು; ಬಾದಶಹನು ಈ ಉತ್ತರ ಕೇಳಿ ನಕ್ಕುಬಿಟ್ಟನು.

## ೧೨. ಗೆರೆ ಕಿರಿದಾಯಿತು

ಒಮ್ಮೆ ಬಾದಶಹನು ಕಾಗದದ ಮೇಲೆ ಲೇಖನಿಯಿಂದ ಒಂದು ಗೆರೆ ಯೆಳೆದು ಬೀರಬಲನೊಡನೆ 'ಇದನ್ನು ಅಳಿಸಲೂ ಬಾರದು, ಬೆಳೆಸಲೂ ಬಾರದು; ಕಿರಿದುಮಾಡಬೇಕು' ಎಂದನು.

ಬೀರಬಲನು ಕೂಡಲೇ ಆ ಗೆರೆಯ ಪಕ್ಕದಲ್ಲಿ ಅದಕ್ಕಿಂತ ದೊಡ್ಡ ಗೆರೆಯನ್ನೆಳೆದು 'ಮಹಾರಾಜ! ನೋಡಿ, ಈಗ ನಿಮ್ಮ ಗೆರೆ ಕಿರಿದಾಯಿತು' ಎಂದನು. ಬಾದಶಹನಿಗೆ ಅದನ್ನು ಕಂಡು ಸಂತೋಷವಾಯಿತು.

## ೧೩. ಬಣ್ಣ ಹಚ್ಚುವವರಿಗೆ ಮೆದುಳೇ ಇರುವುದಿಲ್ಲ!

ಅಕಬರ ಬಾದಶಹನ ತಲೆಗೂದಲು ಬೆಳ್ಳಗಾದಾಗ ಅವನು ಅದನ್ನು ಮುಚ್ಚುವುದಕ್ಕೆಂದು ಕೃತ್ರಿಮ ಸಾಧನಗಳನ್ನು ಉಪಯೋಗಿಸಿದನು. ಯಾವ ಔಷಧಿಗಳಿಂದಲೂ ಅದು ಕಪ್ಪಾಗದಾಗ, ನಿರುಪಾಯನಾಗಿ ಕಪ್ಪು ಬಣ್ಣ ಹಚ್ಚತೊಡಗಿದನು.

ಒಂದು ದಿನ ಬಾದಶಹನು ತಲೆಗೂದಲಿಗೆ ಬಣ್ಣ ಹಚ್ಚುತಿದ್ದಾಗಲೇ ಬೀರಬಲನು ಅಲ್ಲಿಗೆ ಬಂದನು. ಬಾದಶಹನಿಗೆ ಆ ಬಣ್ಣದ ಗುಣದೋಷಗಳ ಅರಿವಿದ್ದಿಲ್ಲ. ಅದಕ್ಕಾಗಿ ಬೀರಬಲನೊಡನೆ –'ಬಣ್ಣ ಬಳಿಯುವುದರಿಂದ ಮೆದುಳಿನ ಮೇಲೆ ಏನಾದರೂ ಕೆಟ್ಟ ಪರಿಣಾಮ ಆಗುವುದುಂಟೆ?' ಎಂದು ಕೇಳಿದನು. ಬೀರಬಲನು'ಮಹಾರಾಜ! ಬಣ್ಣ ಹಚ್ಚಿಕೊಳ್ಳುವವರಿಗೆ ಮೆದುಳೆ

ಇಲ್ಲದ ಮೇಲೆ ಕೆಟ್ಟ ಪರಿಣಾಮವು ಎಲ್ಲಿಂದ ಬರಬೇಕು?' ಎಂದನು. 'ಅಂದರೆ ನನಗೆ ಮೆದುಳೇ ಇಲ್ಲವೆಂದರ್ಥವೆ?'—ಆಶ್ಚರ್ಯದಿಂದ ಅಕಬರ ಪ್ರಶ್ನಿಸಿದನು.

'ನಿಮಗೆ ಮೆದುಳಿರುತ್ತಿದ್ದರೆ ಈ ಮುದಿವಯಸ್ಸಿನಲ್ಲಿ ಯುವಕರಾಗಬೇಕೆಂಬ ಹುಚ್ಚು ಉಂಟಾಗುತ್ತಿತ್ತೆ?' ಎಂದು ನಮ್ರತೆಯಿಂದ ಬೀರಬಲ ಉತ್ತರವಿತ್ತನು; ಬಾದಶಹನಿಗೆ ಈ ಉತ್ತರ ಸರಿಯೆನಿಸಿತು. ಅಂದಿನಿಂದ ಬಣ್ಣ ಹಚ್ಚುವುದನ್ನು ನಿಲ್ಲಿಸಿಬಿಟ್ಟನು.

## ೧೪. ಸಂಪತ್ತು ಇರಲೇ, ಹೋಗಲೆ?

ಬಾದಶಹ ಅಕಬರನ ದರಬಾರಿನಲ್ಲಿ 'ಸಂಪತ್ತು' ಎಂಬ ನೌಕರನೊಬ್ಬನಿದ್ದ. ಯಾವುದೋ ಅಜಾಗರೂಕತೆಗಾಗಿ ಬಾದಶಹನು ಅವನನ್ನು ಕೆಲಸದಿಂದ ತೆಗೆದುಹಾಕಿದ; ಮತ್ತೆಂದೂ ದರಬಾರಿಗೆ ಬರಬಾರದೆಂದು ಅಪ್ಪಣೆಯಿತ್ತ; ಸಂಪತ್ತು ಬಹಳ ಅತ್ತ; ವಿನಂತಿಸಿಕೊಂಡ. ಆದರೆ ಒಮ್ಮೆ ಕೊಟ್ಟ ಅಪ್ಪಣೆಯನ್ನು ಬಾದಶಹ ಹಿಂತೆಗೆದುಕೊಳ್ಳಲಿಲ್ಲ. ಇನ್ನೂ ಅಲ್ಲೇ ನಿಂತರೆ, ಮತ್ತೂ ಸಿಟ್ಟಾಗಿ ಅವನೇನಾದರೂ ಕಠಿನ ದಂಡನೆ ವಿಧಿಸಬಹುದೆಂದು ಹೆದರಿ, ನಿರಾಶೆಯಿಂದ ಹೊರಟುಹೋದ; ಹಿಂದಿರುಗುವಾಗಲೇ ಅವನಿಗೆ ಬೀರಬಲನ ನೆನಪಾಯಿತು. ತನ್ನನ್ನು ಈ ಸಂಕಟದಿಂದ ಪಾರುಮಾಡಲು ಅವನೊಬ್ಬನೇ ಸಮರ್ಥನೆಂದು ಬಗೆದು ಸಂಪತ್ತು ಅಲ್ಲಿಗೆ ಹೋಗಿ ನಡೆದುದನ್ನೆಲ್ಲ ವಿನಂತಿಸಿದ; ಮತ್ತು ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಂಡ. "ಇನ್ನೊಮ್ಮೆ ನೀನು ದರಬಾರಿಗೆ ಹೋಗಿ ಬಾದಶಹರೊಡನೆ 'ಸಂಪತ್ತು ಇರಲೆ? ಹೋಗಲೆ?' ಎಂದು ಕೇಳು!" ಎಂದು ಬೀರಬಲ ತಿಳಿಸಿದ. ಅವನ ಹೇಳಿಕೆಯ ಮೇರೆಗೆ ಮರುದಿನವೇ ಸಂಪತ್ತು ಬಾದಶಹನಲ್ಲಿಗೆ ಹೋಗಿ 'ಸಂಪತ್ತು ಇರಲೆ ಹೋಗಲೆ?' ಎಂದು ಕೇಳಿದ. ಶ್ಲೇಷಾರ್ಥದ ಈ ವಾಕ್ಯವನ್ನು ಕೇಳಿ ಬಾದಶಹನು ಸಂತೋಷಗೊಂಡು 'ಇರಲಿ' ಎಂದ. ಸಂಪತ್ತನ್ನು ಬಿಟ್ಟುಕೊಡಲು ಪ್ರಪಂಚದಲ್ಲಿ ಯಾವ ಮನುಷ್ಯನು ಸಿದ್ಧನಾದಾನು? ಸಂಪತ್ತು ಪುನಃ ತನ್ನ ಕೆಲಸಕ್ಕೆ ಸೇರಿಕೊಂಡಾಗ ಅಕಬರನು ಅವನನ್ನು ಕರೆದು—'ಈ ಯುಕ್ತಿಯನ್ನು ನಿನಗಾರು ತಿಳಿಸಿದರು?' ಎಂದು ಪ್ರಶ್ನಿಸಿದ. ಅವನು ಬೀರಬಲನ ಹೆಸರು ಹೇಳಿದಾಗ, 'ಹೌದು! ಅವನಲ್ಲದೆ ಬೇರಾರಿಗೂ

ಇಂತಹ ಉಪಾಯ ಹೊಳೆಯಲಾರದು' ಎಂದು ಅಕಬರನು ಬೀರಬಲನನ್ನು ಕೊಂಡಾಡಿದನು.

## ೧೫. ಈ ನಾಲ್ಕು ಜನರು....!

ಒಮ್ಮೆ ಬೀರಬಲನು ದರಬಾರಿಗೆ ಬರುತ್ತಲೇ ಅಕಬರನು ಈ ನಾಲ್ಕು ಗುಣಗಳುಳ್ಳ ಪ್ರಾಣಿಗಳನ್ನು ತರುವಂತೆ ಅಪ್ಪಣೆಕೊಟ್ಟನು........(೧) ಇಲ್ಲಿ ಇದ್ದು ಅಲ್ಲಿ ಇರಬಾರದು. (೨) ಅಲ್ಲಿ ಇದ್ದು ಇಲ್ಲಿ ಇರಬಾರದು. (೩) ಇಲ್ಲೂ ಅಲ್ಲೂ ಎಲ್ಲೂ ಇರಬಾರದು. (೪) ಇಲ್ಲಿ ಮತ್ತು ಅಲ್ಲಿ—ಎರಡೂ ಕಡೆಗಳಲ್ಲಿ ಇರಬೇಕು!'

ಈ ನಾಲ್ಕು ವಿಚಿತ್ರಪ್ರಾಣಿಗಳನ್ನು ತರಲೆಂದು ಬೀರಬಲನು ಆಗಲೇ ಸಭಾಭವನದಿಂದ ಹೊರಬಿದ್ದನು. ತುಸು ದೂರ ಹೋಗುತ್ತಲೇ ದಾರಿಯಲ್ಲೊಬ್ಬ ಭಿಕ್ಷುಕ ಸಿಕ್ಕಿದ. ಅವನಿಗೆ ಸ್ವಲ್ಪ ಹಣಕೊಟ್ಟು ತನ್ನೊಂದಿಗೆ ಬರ ಹೇಳಿದ. ಸ್ವಲ್ಪ ದೂರ ಹೋದ ಬಳಿಕ ಒಬ್ಬ ಸಾಧು ಸಿಕ್ಕಿದ, ಅವನನ್ನೂ ಒಟ್ಟಿಗೆ ಕರೆದುಕೊಂಡು ಮುನ್ನಡೆದ; ಬಳಿಕ ನಗರದ ಪ್ರತಿಷ್ಠಿತ ದಾನವೀರ ಸೇಠನನ್ನೂ ಒಬ್ಬಳು ವೇಶ್ಯೆಯನ್ನೂ ಕರೆದುಕೊಂಡು ಅರಮನೆಗೆ ನಡೆದ. ಬೀರಬಲನನ್ನು ಕಾಣುತ್ತಲೇ 'ನಾಲ್ಕೂ ಪ್ರಾಣಿಗಳು ದೊರೆತವೆ?' ಎಂದ ಅಕಬರ. 'ಹೌದು, ಮಹಾರಾಜ! ಇಲ್ಲೇ ಹೊರಗೆ ಇದ್ದಾರೆ!' ಎಂದು ನಾಲ್ವರನ್ನೂ ಒಳಗೆ ಕರೆತಂದು ಎದುರು ನಿಲ್ಲಿಸಿದ. ಬಾದಶಹನು 'ಸ್ಪಷ್ಟಪಡಿಸೆ'ಂದು ಅಪ್ಪಣೆಯಿತ್ತಾಗ ಬೀರಬಲ ವಿವರಿಸಿದ....(೧) 'ಇವಳು ವೇಶ್ಯೆ, ಇವಳು ಇಲ್ಲೇನೋ ಇದ್ದಾಳೆ; ಆದರೆ ಇವಳ ಉದ್ಯೋಗವು ತುಂಬಾ ಹೊಲಸಾದ್ದರಿಂದ ಅಲ್ಲಿ ಅಂದರೆ ಪರಲೋಕದಲ್ಲಿ ಇವಳಿಗೆ ಸದ್ಗತಿಯಿಲ್ಲ; ಇಹಲೋಕದಲ್ಲಿ ಮಾತ್ರ ಇವಳು ಆನಂದವನ್ನು ಅನುಭವಿಸಬಹುದು.

(೨) ಬಳಿಕ ಸಾಧುವನ್ನು ಬಾದಶಹನಿಗೆ ತೋರಿಸಿ ಅವನೆಂದ....'ಈ ಸಾಧುಮಹಾರಾಜರು ಹಗಲಿರುಳೂ ಭಗದ್ಭಜನದಲ್ಲಿ ಮಗ್ನರಾಗಿರುತ್ತಾರೆ. ಯಾರಾದರೂ ಊಟಹಾಕಿದರೆ ಉಂಡರು; ಇಲ್ಲದಿದ್ದರೆ ಉಪವಾಸವೇ ಗತಿ; ಆದ್ದರಿಂದ ಇವರಿಗೆ ಇಹಲೋಕದಲ್ಲಿ (ಇಲ್ಲಿ) ಸುಖವಿಲ್ಲ; ಆದರೆ ಮರಣದ ನಂತರ ಇವರಿಗೆ ಅವಶ್ಯವಾಗಿಯೂ ಮೋಕ್ಷ ದೊರೆಯುವುದು; ಮತ್ತು

ಇವರು ಸ್ವರ್ಗಸುಖ ಪಡೆಯುವರು. ಅಂದರೆ ಇಲ್ಲೇನೋ ಸುಖ ಇಲ್ಲ. ಆದರೆ ಅಲ್ಲಿ ಇದೆ!'

(೩) 'ಇವನೊಬ್ಬ ಬಡ ಭಿಕ್ಷುಕ. ಇವನು ಹಗಲಿಡೀ ಮನೆಮನೆಗೆ ತಿರುಗಿ ಭಿಕ್ಷೆ ಬೇಡುತ್ತಾನೆ. ಆದರೆ ಹೊಟ್ಟೆ ತುಂಬ ಸಿಗುವುದಿಲ್ಲ. ಇವನ ಈ ಹಾಳು ಕೆಲಸದಿಂದ ಇವನಿಗೆ ಇಲ್ಲೂ ಸುಖವಿಲ್ಲ; ಸ್ವರ್ಗದಲ್ಲೂ ಸ್ಥಳವಿಲ್ಲ; ಆದ್ದರಿಂದ ಇವನು ಇಲ್ಲೂ ಇಲ್ಲ; ಅಲ್ಲೂ ಇಲ್ಲ.'

(೪) 'ಇನ್ನುಳಿದ ಈ ಶ್ರೀಮಂತ ಸೇಠರು ಮಹಾದಾನಿಗಳು. ಸೌಭಾಗ್ಯದಿಂದ ಐಶ್ವರ್ಯ ತುಳುಕಾಡುತ್ತಿದೆ; ಇವರು ಈ ಲೋಕದಲ್ಲಿ ಸರ್ವ ಸುಖವನ್ನೂ ಅನುಭವಿಸುತ್ತಿದ್ದಾರೆ; ತಮ್ಮ ಹಣವನ್ನು ಅಪವ್ಯಯಗೊಳಿಸದೆ ದಾನಧರ್ಮಾದಿ ಸತ್ಕಾರ್ಯಗಳಲ್ಲಿ ಖರ್ಚುಮಾಡುವುದರಿಂದ ಇವರಿಗೆ ಪರಲೋಕದಲ್ಲೂ ಸುಖ ಸಿಗುವುದು. ಹೀಗೆ ಇವರು ಇಲ್ಲೂ ಅಲ್ಲೂ ಇದ್ದಾರೆ!'

ಬಾದಶಹನೂ ದರಬಾರಿಗಳೂ ಈ ಉತ್ತರದಿಂದ ತುಂಬ ಹರ್ಷಿತರಾದರು. ಆ ನಾಲ್ವರನ್ನೂ ಯೋಗ್ಯ ಸನ್ಮಾನದೊಂದಿಗೆ ಕಳುಹಿಸಲಾಯಿತು.

## ೧೬. ಕೃತಜ್ಞ, ಕೃತಘ್ನ!

ಬಾದಶಹನು ಒಮ್ಮೆ ಬೀರಬಲನೊಡನೆ ಕೃತಜ್ಞ ಹಾಗೂ ಕೃತಘ್ನ ಜೀವಿಗಳನ್ನು ತರಲು ಹೇಳಿದ. ಬೀರಬಲನು ತುಂಬ ಯೋಚಿಸಿ ಒಂದು ನಾಯಿಯನ್ನೂ ತನ್ನ ಅಳಿಯನನ್ನೂ ದರಬಾರಿಗೆ ಕರೆತಂದ. ಇಬ್ಬರನ್ನೂ ಎದುರು ನಿಲ್ಲಿಸಿ ಹೇಳಿದ....'ಮಹಾರಾಜ! ಈ ನಾಯಿ ರೊಟ್ಟಿಯ ತುಂಡೊಂದನ್ನು ತಿಂದು ಬದುಕುತ್ತಿದ್ದೆ; ಆದರೆ ಇದು ತುಂಬಾ ಸ್ವಾಮಿಭಕ್ತ ಸೇವಕ. ತನ್ನ ಮೇಲೆ ಬರುವ ಗಂಡಾಂತರಗಳನ್ನೆಲ್ಲ ಸಹಿಸಿ ಯಜಮಾನನನ್ನು ಸಂಕಟಗಳಿಂದ ರಕ್ಷಿಸುತ್ತದೆ; ಯಜಮಾನನು ಇದನ್ನು ಎಷ್ಟೇ ಹೊಡೆದು ಓಡಿಸಿದರೂ ಪ್ರೀತಿಯಿಂದ ಕರೆದನೆಂದರೆ ಬಾಲ ಅಲ್ಲಾಡಿಸುತ್ತಾ ಹತ್ತಿರ ಬರುವುದು. ಇದರ ಬದಲಾಗಿ ಈ ಅಳಿಯ ಮಹಾರಾಯರನ್ನು ನೋಡಿರಿ; ಹುಡುಗಿಯ ತಂದೆ ತನ್ನ ಸರ್ವಸ್ವವನ್ನೂ ಕೊಟ್ಟು ಬೀದಿಯ

ಭಿಕಾರಿಯಾದರೂ ಈ ಮಹಾಶಯರಿಗೆ ತೃಪ್ತಿಯೆನಿಸುವುದಿಲ್ಲ. ಇನ್ನೂ ಇನ್ನೂ ಆವನನ್ನು ಸುಲಿಯುವುದೊಂದೇ ಇವರ ಗುರಿಯಾಗಿರುತ್ತದೆ!'

ಬೀರಬಲನ ಮಾತು ಅಕಬರನಿಗೆ ಒಪ್ಪಿಗೆಯಾಯಿತು. ಆದರೆ ಅಳಿಯನ ಮೇಲೆ ಎಲ್ಲಿಲ್ಲದ ಸಿಟ್ಟು ಬಂತು. 'ಇಂತಹ ಕೃತಘ್ನರು ನಮ್ಮ ರಾಜ್ಯದಲ್ಲಿರಬಾರದು. ಈಗಲೇ ಇವನನ್ನು ಫಾಶಿಗೆ ಕೊಡಿರಿ; ಮತ್ತು ನಾಯಿಗೆ ಹಾಲು ಕುಡಿಸಿರಿ' ಎಂದು ಆಜ್ಞೆಯಿತ್ತ.

ಬಾದಶಹನ ಆಜ್ಞೆ ಕೇಳಿ ಬೀರಬಲನು ಮೊದಲೇನೋ ಗಾಬರಿಯಾದ. ಆದರೆ ತಕ್ಷಣ ಸುಧಾರಿಸಿಕೊಂಡು ಹೇಳಿದ: 'ಮಹಾರಾಜ, ನಾನು ನಿನ್ನ ಅಳಿಯನ ಬಗ್ಗೆ ಹೇಳಿದುದಲ್ಲ; ನನ್ನ ಮಾತು ಎಲ್ಲ ಅಳಿಯಂದಿರಿಗೂ ಅನ್ವಯಿಸುತ್ತದೆ. ಇಂತಹ ಸ್ಥಿತಿಯಲ್ಲಿ ಇವನಿಗೆ ಮಾತ್ರ ಶಿಕ್ಷೆ ಕೊಡುವುದು ಉಚಿತವಲ್ಲ; ಏಕೆಂದರೆ ನೀವೂ ನಿಮ್ಮ ಮಾವನ ಅಳಿಯಂದಿರಲ್ಲವೇ?' ಎಂದನು. ಬಾದಶಹನು ಈ ಮಾತಿನಿಂದ ತುಂಬ ಲಜ್ಜಿತನಾದನು.

## ೧೭. ಮಯಣದ ರಾಜಕುಮಾರ

ಒಂದು ದಿನ ಬಾದಶಹನು ಬೀರಬಲನೊಡನೆ ಹೀಗೆಂದ: 'ನಿಮ್ಮ ಧರ್ಮಗ್ರಂಥಗಳಲ್ಲಿ ಆನೆಯ (ಗಜೇಂದ್ರ ಮೋಕ್ಷದ ಕತೆ) ಮೊರೆ ಕೇಳುತ್ತಲೇ ನಿಮ್ಮ ದೇವರು ಓಡಿಬಂದರೆಂದು ಹೇಳಲಾಗಿದೆಯಷ್ಟೆ! ಒಟ್ಟಿಗೆ ಸೇವಕರೂ ಇರಲಿಲ್ಲ; ವಾಹನವನ್ನೂ ತೆಗೆದುಕೊಳ್ಳಲಿಲ್ಲ! ಇಷ್ಟು ಕ್ಷುಲ್ಲಕ ಕಾರ್ಯಕ್ಕೆ ಸ್ವತಃ ದೇವರೇ ಹೋಗಬೇಕೆ? ಯಾರಾದರೂ ನೌಕರನನ್ನು ಕಳಿಸುತಿದ್ದರೆ ಸಾಕಾಗುತ್ತಿರಲಿಲ್ಲವೇ?'

ಇದಕ್ಕೆ ಕೆಲದಿನಗಳ ಬಳಿಕ ಉತ್ತರ ಕೊಡುವುದಾಗಿ ಬೀರಬಲ ತಿಳಿಸಿದ. ೧೦–೧೫ ದಿನಗಳ ಬಳಿಕ ಬೀರಬಲನು ಒಬ್ಬ ಸೇವಕನಿಗೆ ಅಕಬರನ ಮೊಮ್ಮಗನಂತೆಯೇ ಕಾಣುವ ಮಯಣದ ಬೊಂಬೆಯನ್ನು ಕೊಟ್ಟ; ಅದನ್ನು ಆಭರಣಗಳಿಂದಲೂ ಉಡುಗೆಯಿಂದಲೂ ಅಲಂಕರಿಸಲಾಯಿತು. ದೂರದಿಂದ ನೋಡುವಾಗ ರಾಜಕುಮಾರನಂತೆಯೇ ಕಾಣಿಸುತ್ತಿದ್ದ. ಸೇವಕನಿಗೆ ಕೊಟ್ಟು ಹೀಗೆಂದ: 'ದಿನಾಲೂ ನೀನು ಬಾದಶಹನ ಮೊಮ್ಮಗನನ್ನು ಹೊತ್ತುಕೊಂಡು ಹೋಗುವಂತೆಯೇ ಇಂದು ಈ ಬೊಂಬೆಯನ್ನು

ಹೊತ್ತುಕೊಂಡು ನಡೆ. ಆದರೆ ಆ ಸರೋವರದ ಬಳಿ ಕಾಲು ಜಾರಿದಂತೆ ನಟಿಸಿ ಕೆಳಗೆ ಬಿದ್ದುಬಿಡು; ಆದರೆ ನೀನು ಕೆಳಗೆ ಬಿದ್ದಾಗ ನಿನ್ನ ಕೈಯ್ಯಲ್ಲಿ ರುವ ಬೊಂಬೆ ನೀರಿಗೆ ಬೀಳಬೇಕು. ಈ ಕಾರ್ಯದಲ್ಲಿ ನೀನು ಸಫಲನಾ ದರೆ ಬೇಕಾದಷ್ಟು ಬಹುಮಾನ ಕೊಡುವೆ.' ಹಣದಾಸೆಯಿಂದ ಆ ಸೇವ ಕನು ಹಾಗೆಯೇ ಮಾಡಿದ. ನೌಕರನು ಸರೋವರದ ಬಳಿಯೇ ಜಾರಿದು ದನ್ನೂ ಅವನ ಕೈಯಿಂದ ಮಗುವು ನೀರಿಗೆ ಬೀಳುವುದನ್ನೂ ಬಾದಶಹನು ನೋಡಿದ. ಅವನು ಗಾಬರಿಯಿಂದ ಓಡೋಡಿ ಅಲ್ಲಿಗೆ ಬಂದು ಸರೋವರಕ್ಕೆ ಹಾರಿ ಆ ಮೂರ್ತಿಯನ್ನು ಹೊರತಂದ.

ಈಗ ಬಾದಶಹನಿಗೆ ತನ್ನ ಭ್ರಮೆ ಅರಿವಾಯಿತು. ಅಲ್ಲಿಯೇ ಇದ್ದ ಬೀರಬಲ ಹೇಳಿದ— 'ಹತ್ತಾರು ಜನ ಸೇವಕರು ಇಲ್ಲೇ ಇದ್ದಾರೆ; ನೀವು ಸೂಚನೆ ಕೊಡುತ್ತಲೇ ನೀರಿಗೆ ಧುಮುಕುತ್ತಿದ್ದರು. ಅದನ್ನು ಬಿಟ್ಟು ನೀವೇ ಓಡಿಬಂದು ನೀರಿಗೆ ಅದೇಕೆ ಹಾರಿದಿರಿ? ನಿಮ್ಮ ವಾಹನೆಗಳನ್ನೂ ತೆಗೆದು ಕೊಳ್ಳಲಿಲ್ಲವೇಕೆ?' ಆಗ ಬಾದಶಹನಿಗೆ ತನ್ನ ಪ್ರಶ್ನೆಯು ನೆನಪಾಯಿತು. 'ನೋಡಿ, ನಿಮಗೆ ನಿಮ್ಮ ಮೊಮ್ಮಗನು ತುಂಬ ಪ್ರಿಯನಾಗಿರುವಂತೆಯೇ ಭಗವಂತನಿಗೆ ತನ್ನ ಭಕ್ತನು ಅತೀ ಪ್ರಿಯನಾಗಿರುತ್ತಾನೆ. ಭಕ್ತರ ಮೊರೆ ಕೇಳಿ ಅವನು ಅವರ ಉದ್ಧಾರಕ್ಕಾಗಿ ತಾನೇ ಬಂದು ಬಿಡುತ್ತಾನೆ!' ಎಂದು ವಿವರವಾಗಿ ಬಾದಶಹನಿಗೆ ತಿಳಿಸಿದ. ಬಾದಶಹನು ಒಪ್ಪಲೇ ಬೇಕಾಯಿತು.

## ೧೮. ಗಿಳಿಯ ಸಾವು

ಒಬ್ಬ ಸಾಧುವಿಗೆ ಗಿಳಿ ಸಾಕುವ ಆಸಕ್ತಿಯಿತ್ತು. ದಿನಾಲೂ ಹೊಸ ಹೊಸ ಗಿಳಿಗಳನ್ನು ಹಿಡಿದು ಅವಕ್ಕೆ ಮಾತು ಕಲಿಸುತ್ತಿದ್ದ. ಅವು ಚೆನ್ನಾಗಿ ಮಾತಾಡತೊಡಗಿದಾಗ ನಗರದ ಪ್ರತಿಷ್ಠಿತ ಸಜ್ಜನರಿಗೆ ಮಾರಿ ಬಂದ ಹಣ ದಿಂದ ಜೀವನ ನಡೆಸುತ್ತಿದ್ದ. ಒಮ್ಮೆ ಅವನಿಗೆ ಒಳ್ಳೇ ಗಿಳಿಯೊಂದು ಸಿಕ್ಕಿತು. ತನ್ನ ಮನೆಯಲ್ಲಿಟ್ಟುಕೊಂಡು ಅದಕ್ಕೆ ಚೆನ್ನಾಗಿ ಮಾತು ಕಲಿಸಿದ ಮತ್ತು ಬಾದಶಹನಲ್ಲಿಗೆ ಕೊಂಡೊಯ್ದು ಕಾಣಿಕೆ ಕೊಟ್ಟ. ಪ್ರಶ್ನೆಗಳಿಗೆ ತಕ್ಕ ಉತ್ತರ ಕೊಡುತ್ತಿದ್ದ ಆ ಹಕ್ಕಿಯನ್ನು ಕಂಡು ಬಾದಶಹನಿಗೆ ತುಂಬಾ ಆನಂ ದವಾಯಿತು. ಬಾದಶಹನು ಆ ಗಿಳಿಯ ರಕ್ಷಣೆಯ ಭಾರವನ್ನು ಅತಿ

ವಿಶ್ವಾಸಪಾತ್ರ ಸೇವಕನಿಗೆ ಒಪ್ಪಿಸಿ ಅದರ ಸ್ವಭಾವದಲ್ಲಿ ಯಾವ ರೀತಿಯ ದೋಷವೂ ಕಾಣಿಸಬಾರದೆಂದು ಎಚ್ಚರಿಸಿದ. ಅದರ ಮೃತ್ಯುಸಮಾಚಾರವನ್ನಾರಾದರೂ ತಂದರೆಂದರೆ ಅಂತಹರನ್ನು ಕೊಲ್ಲಿಸಿಬಿಡುತ್ತೇನೆಂದೂ ಎಚ್ಚರಿಕೆ ಕೊಟ್ಟ. ಬಾದಶಹನ ಅಪ್ಪಣೆಯಂತೆ ಕಾವಲುಗಾರನು ಎಲ್ಲಾ ವ್ಯವಸ್ಥೆಯನ್ನೂ ನೋಡಿಕೊಂಡು ಜಾಗ್ರತೆಯಿಂದ ಗಿಳಿಯನ್ನು ಸಾಕುತ್ತಿದ್ದ. ಆದರೇನು? ಸಾವಿಗೆ ಯಾರಾದರೂ ಇದಿರು ನಿಲ್ಲಲು ಸಾಧ್ಯವೆ? ಒಂದು ದಿನ ಆ ಗಿಳಿ ಇದ್ದಕ್ಕಿದ್ದಂತೆ ಸತ್ತುಹೋಯಿತು. ಕಾವಲುಗಾರನಿಗೆ ತನ್ನ ಪ್ರಾಣವು ಗಂಡಾಂತರಕ್ಕೀಡಾಗಿದೆಯೆಂದು ತಿಳಿಯಿತು ಬೇರಾವ ಉಪಾಯವನ್ನೂ ಕಾಣದೆ ಅವನು ನೇರಾಗಿ ಬೀರಬಲನಲ್ಲಿಗೆ ನಡೆದು ತನ್ನ ಕಷ್ಟ ತೋಡಿಕೊಂಡ. 'ನಾನು ಬಾದಶಹರಿಗೆ ಗಿಳಿಯ ಸಾವಿನ ಸುದ್ದಿ ಮುಟ್ಟಿಸಿದರೂ ನನಗೆ ಮೃತ್ಯು ಸಿದ್ಧ; ಹಾಗೆಯೇ ಸುಮ್ಮನಿದ್ದರೂ ಸಾವು ತಪ್ಪದು. ಹೇಗಾದರೂ ನನ್ನನ್ನು ಬದುಕಿಸಿರಿ' ಎಂದು ಅಂಗಲಾಚಿದ.

ಬೀರಬಲನು ಅವನಿಗೆ ಧೈರ್ಯ ಹೇಳಿ, ಬಾದಶಹನಿಗೆ ಸುದ್ದಿ ಮುಟ್ಟಿಸುವ ಜವಾಬ್ದಾರಿಯನ್ನು ತಾನೇ ಹೊತ್ತುಕೊಂಡ. ಅವನು ಬಾದಶಹನ ಎದುರು ಹೋಗಿ....'ಗಿ....ಗಿ....ಗಿ....ಳಿ' ಎಂದ. 'ಏನಾಯಿತು? ಸತ್ತಿತೆ?' 'ಇಲ್ಲ ಮಹಾರಾಜ, ಅದೀಗ ಸಮಾಧಿ ಹೊಂದಿದೆ! ಇಂದು ಬೆಳಗಿನಿಂದಲೇ ಅದು ಏನನ್ನೂ ತಿನ್ನಲಿಲ್ಲ....ರೆಕ್ಕೆ ಬಡಿಯಲಿಲ್ಲ ...ಕಣ್ತೆರೆಯಲೂ ಇಲ್ಲ.... ಮಾತಾಡಲೂ ಇಲ್ಲ....!' ಬಾದಶಹನು ಅದನ್ನು ಕೇಳಿ ಗಿಳಿಯಿದ್ದಲ್ಲಿಗೆ ನಡೆದು ನೋಡಿದಾಗ ಅದು ಸತ್ತಿತ್ತು! 'ಸುಮ್ಮನೆ ನೀನು ನನ್ನನ್ನು ಇಲ್ಲಿಗೆ ಕರೆತಂದೆಯಲ್ಲ; ಗಿಳಿ ಸತ್ತು ಹೋಯಿತೆಂದು ಅಲ್ಲೇ ಹೇಳಬಾರದಿತ್ತೆ?' ಎಂದ. 'ಆದರೆ ನಾನೇ ಆ ಮಾತು ಹೇಳುತ್ತಿದ್ದರೆ ನನ್ನ ಪ್ರಾಣವೇ ಹೋಗುತ್ತಿತ್ತು!' ಎಂದು ನಮ್ರತೆಯಿಂದ ಬೀರಬಲ ಉತ್ತರವಿತ್ತ. ಬಾದಶಹನಿಗೆ ತನ್ನ ಪ್ರತಿಜ್ಞೆ ನೆನಪಾದಾಗ ಬೀರಬಲನ ಉಪಾಯಕ್ಕಾಗಿ ಸಂತೋಷಗೊಂಡ. ಹೀಗೆ ಬೀರಬಲನು ಕಾವಲುಗಾರನ ಪ್ರಾಣ ಉಳಿಸಿದ. (ಆಧಾರದಿಂದ)



Edited, Printed & Published by K. V. Shenoy
at The Prabhat Printers, Ltd., Mangalore.